RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಅಕ್ಟೋಬರ್ ೩೧, ೨೦೧೩ (ಕಾರ್ತೀಕ ೯, ಶಕ ವರ್ಷ ೧೯೩೫)<br>Bangalore, Thursday, October 31, 2013 (Karthika 9, Shaka Varsha 1935) | ಸಂಚಿಕೆ ೪೩<br>Issue 43 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ – 573 201

**ಗ್ರಾಲೆ.ಸಿಬ್ಬಂದಿ–106/2010–2011, ದಿನಾಂಕ: 20.07.2013**

**ಆದೇಶ**

**ವಿಷಯ:–** ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ 2011 ನೇ ಸಾಲಿನಲ್ಲಿ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿರುವ ಸಂಬಂಧ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:–**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 299 ಬಿಎಸ್‌ಸಿ 2006 ದಿನಾಂಕ: 03/02/2009, 24/07/2009 ಮತ್ತು 08/09/2009.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 04 ಬಿಎಸ್‌ಸಿ 2011 ದಿನಾಂಕ: 25/02/2011.
3. ಈ ಕಾರ್ಯಾಲಯದ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 13/05/2011.
4. ಈ ಕಾರ್ಯಾಲಯದ ಆಯ್ಕೆ ಪಟ್ಟಿ ದಿನಾಂಕ: 24–09–2011.
5. ಈ ಕಾರ್ಯಾಲಯದ ಸಮ ಸಂಖ್ಯೆಯ ನೋಟೀಸು ದಿನಾಂಕ: 29/08/2012.
6. ಅಂಚೆ ಇಲಾಖೆ, ಹಾಸನ ಇವರ ವರದಿಗಳು ದಿನಾಂಕ: 22/03/2013, 25/03/2013, 10/04/2013 ಮತ್ತು 12/04/2013.

ಹಾಸನ ಜಿಲ್ಲಾ ಕಂದಾಯ ಘಟಕದಲ್ಲಿ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಂಬಂಧ ಆಯ್ಕೆಗೊಂಡ ಈ ಕೆಳಕಂಡ ಕ್ರಮ ಸಂಖ್ಯೆ: 1 ರಿಂದ 6 ರಲ್ಲಿನ ಅಭ್ಯರ್ಥಿಗಳು ಉಲ್ಲೇಖ (4) ರ ಆಯ್ಕೆ ಪಟ್ಟಿಯಂತೆ ನಿಯಮಾನುಸಾರ ಗ್ರಾಮಲೆಕ್ಕಾಧಿಕಾರಿ ಹುದ್ದೆಗೆ ಆಯ್ಕೆ ಆಗಿರುತ್ತಾರೆ. ಆದರೆ ದಾಖಲೆಗಳನ್ನು ಹಾಜರುಪಡಿಸದ ಕಾರಣ ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡಿರುವುದಿಲ್ಲವಾರಿಂದ ಸದರಿ ಅಭ್ಯರ್ಥಿಗಳು, ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ.

ಆಯ್ಕೆ ಆಗಿರುವಂತೆ ಈ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ನೀಡುವ ಸಲುವಾಗಿ ಸದರಿ ಅಭ್ಯರ್ಥಿಗಳ ಮೂಲ ಪಿ.ಯು.ಸಿ. ಅಂಕ ಪಟ್ಟಿಗಳ ನೈಜತೆ ಬಗ್ಗೆ ಪರಿಶೀಲನಾ ವರದಿ, ಸದರಿ ಅಭ್ಯರ್ಥಿಗಳು ನೀಡಿರುವ ಪ್ರಮಾಣ ಪತ್ರಗಳ ಸಿಂಧುತ್ವ ಪ್ರಮಾಣ ಪತ್ರಗಳು ಹಾಗೂ ಸದರಿ ಅಭ್ಯರ್ಥಿಗಳ ಪೂರ್ವ ವೃತ್ತಾಂತದ ಬಗ್ಗೆ ಪೋಲೀಸ್ ವರದಿ ಅವಶ್ಯಕತೆ ಇದ್ದು, ಸದರಿ ಸಿಂಧುತ್ವ ಪ್ರಮಾಣ ಪತ್ರಗಳು ಹಾಗೂ ಪೋಲೀಸ್ ವರದಿಯನ್ನು ನೀಡುವಂತೆ ಸಂಬಂಧಿಸಿದ ಅಧಿಕಾರಿಗಳಿಗೆ ಪತ್ರ ಬರೆದು, ಸದರಿ ಅಭ್ಯರ್ಥಿಗಳಿಗೆ ಸಂಬಂಧಿಸಿದ ಅಧಿಕಾರಿಗಳ ಕಛೇರಿಗೆ ಹಾಜರಾಗಿ ಸದರಿ ವರದಿಗಳನ್ನು ಮಾಡಿಸಿಕೊಳ್ಳಲು ಸೂಚಿಸಲಾಗಿರುತ್ತದೆ.

ಆದರೆ ಈ ಕೆಳಕಂಡ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಕೆಳಕಂಡ ದಾಖಲೆಗಳು ಈ ಕಛೇರಿಯಲ್ಲಿ ಸ್ವೀಕೃತವಾಗಿಲ್ಲದ ಕಾರಣ, ಸದರಿ ದಾಖಲೆಗಳು ಸ್ವೀಕೃತವಾಗದಿದ್ದಲ್ಲಿ ಇವರ ಆಯ್ಕೆಯನ್ನು ರದ್ದುಪಡಿಸಲಾಗುವುದೆಂದು ಸದರಿ ಅಭ್ಯರ್ಥಿಗಳಿಗೆ ಉಲ್ಲೇಖ (5) ರಲ್ಲಿ ನೋಟೀಸನ್ನು ನೀಡಿರುತ್ತದೆ.

ಉಲ್ಲೇಖ (6) ರ ಅಂಚೆ ಇಲಾಖೇಯವರ ವರದಿಗಳಂತೆ ನೋಟೀಸು ಕ್ರ.ಸಂ. 1, 3, 4, 5 ಮತ್ತು 6 ರ ಅಭ್ಯರ್ಥಿಗಳಿಗೆ ತಲುಪಿರುತ್ತದೆ. ಕ್ರ.ಸಂ. 2 ರ ಅಭ್ಯರ್ಥಿ ಮರುಳ ಸಿದ್ದಪ್ಪ.ಎನ್.ಯು. ಇವರಿಗೆ ಬಳ್ಳಾರಿ ಜಿಲ್ಲೆಯಲ್ಲಿ ಗ್ರಾಮಲೆಕ್ಕಿಗರ ಹುದ್ದೆಗೆ ಆಯ್ಕೆ ಆಗಿರುವುದರಿಂದ ನೋಟೀಸನ್ನು ತಿರಸ್ಕರಿಸಿರುವುದಾಗಿ ಅಂಚೆ ಇಲಾಖೆಯವರು ವರದಿ ಮಾಡಿರುತ್ತಾರೆ. ನೋಟೀಸು ಸ್ವೀಕರಿಸಿರುವ ಅಭ್ಯರ್ಥಿಗಳು ಇದುವರೆವಿಗೂ ಅಗತ್ಯ ದಾಖಲೆಗಳನ್ನು ಈ

ಕಛೇರಿಗೆ ಹಾಜರುಪಡಿಸಿರುವುದಿಲ್ಲ. ಈ ಕೆಳಕಂಡ ದಾಖಲೆಗಳು ಅಭ್ಯರ್ಥಿಗಳು ಹಾಜರುಪಡಿಸದ ಕಾರಣ ಈ ಕೆಳಕಂಡ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲು ಅವಕಾಶವಿಲ್ಲದ ಕಾರಣ ಸದರಿಯವರ ನೇಮಕಾತಿಯನ್ನು ನೇಮಕಾತಿ ಷರತ್ತಿನಂತೆ ರದ್ದುಪಡಿಸಿ ಆದೇಶಿಸಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಷರಾ |
|---|---|---|
| 1 | ಸವಿತ.ಎಲ್.ಬಿ. ಬಿನ್ ಬಸಪ್ಪ.ಕೆ., C/O ಮಂಜುನಾಥ.ಎಸ್.ಎ. ಕಾರ್ ಪೊಲೀಸ್ ಕ್ವಾಟರ್ಸ್, ಕ್ವುಲೈನ್, ಮನೆ.ನಂ.16, ಮೈಸೂರು ರಸ್ತೆ, ಬೆಂಗಳೂರು–18. ಬೆಂಗಳೂರು ನಗರ. | ಮೂಲ ಪಿ.ಯು.ಸಿ ಅಂಕಪಟ್ಟಿಯನ್ನು ಹಾಜರುಪಡಿಸಿರುವುದಿಲ್ಲ. |
| 2 | ಮರುಳ ಸಿದ್ದಪ್ಪ.ಎನ್.ಯು. ಬಿನ್ ಹನುಮಂತಪ್ಪ.ಎನ್.ಯು. ಮಂಗಾಪುರ ಪೋಸ್ಟ್, ಕುಡ್ಲಿಗಿ ತಾಲ್ಲೂಕು, ಬಳ್ಳಾರಿ–583136. | ಈ ಅಭ್ಯರ್ಥಿಯು ಸಾಮಾನ್ಯ ವರ್ಗದಡಿಯಲ್ಲಿ ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆ ಆಗಿರುತ್ತಾರೆ. ಈ ಸಂಬಂಧ ಸಿಂಧುತ್ವ ಪ್ರಮಾಣ ಪತ್ರ ಸ್ವೀಕೃತವಾಗಿರುವುದಿಲ್ಲ. |
| 3 | ಗುಣಶೇಖರ.ಸಿ. ಬಿನ್ ಚಿಕ್ಕಣ್ಣ, ಎಸ್.ಐ.ಹಗಲಹಳ್ಳಿ, ಸಿ.ಎ.ಕೆರೆ ಹೋಬಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಮಂಡ್ಯ–571422. | ಈ ಅಭ್ಯರ್ಥಿಯು ಸಾಮಾನ್ಯ ವರ್ಗದಡಿಯಲ್ಲಿ ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆ ಆಗಿರುತ್ತಾರೆ. ಈ ಸಂಬಂಧ ಸಿಂಧುತ್ವ ಪ್ರಮಾಣ ಪತ್ರ ಸ್ವೀಕೃತವಾಗಿರುವುದಿಲ್ಲ. |
| 4 | ಶಿವಾನಂದ ಅಂಗಡಿ ಬಿನ್ ಶರಣಪ್ಪ. ಅಟ್ ಪೋಸ್ಟ್ ದಿನಡವರ್ ತಾಲ್ಲೂಕು, ಬಸವನ ಬಾಗೇವಾಡಿ, ಬಿಜಾಪುರ–586203 | ಈ ಅಭ್ಯರ್ಥಿಯು ಸಾಮಾನ್ಯ ವರ್ಗದಡಿಯಲ್ಲಿ ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆ ಆಗಿರುತ್ತಾರೆ. ಈ ಸಂಬಂಧ ಸಿಂಧುತ್ವ ಪ್ರಮಾಣ ಪತ್ರ ಸ್ವೀಕೃತವಾಗಿರುವುದಿಲ್ಲ. |
| 5 | ಕೊಟ್ರೇಶ.ಜಿ. ಬಿನ್ ವೀರಣ್ಣ.ಜಿ., ನಿಲುವನ್ಜಿ ಗ್ರಾಮ, ಬೆನ್ನಿಹಳ್ಳಿ ಪೋಸ್ಟ್, ಹರಪ್ಪನಹಳ್ಳಿ ತಾಲ್ಲೂಕು. ದಾವಣಗೆರೆ–583127. | ಈ ಅಭ್ಯರ್ಥಿಯು ಸಾಮಾನ್ಯ ವರ್ಗದಡಿಯಲ್ಲಿ ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆ ಆಗಿರುತ್ತಾರೆ. ಈ ಸಂಬಂಧ ನಿಗದಿತ ನಮೂನೆಯಲ್ಲಿ ಸಿಂಧುತ್ವ ಪ್ರಮಾಣ ಪತ್ರ ಸ್ವೀಕೃತವಾಗಿರುವುದಿಲ್ಲ. |
| 6 | ಶಿವಕುಮಾರ.ಕೆ. ಬಿನ್ ಕೃಷ್ಣಸ್ವಾಮಿ.ಪಿ. , ನಂ.46, ಪೆಟ್ರೋಲ್ ಪಂಪ್ ಹಿಂಬಾಗ, ಎಂ.ಎಸ್. ಪಾಳ್ಯ ಅಂಚೆ, ವಿದ್ಯಾರಣ್ಯಪುರ, ಬೆಂಗಳೂರು ಅರ್ಬನ್–560097. | ಈ ಅಭ್ಯರ್ಥಿಯು ಪ್ರವರ್ಗ–2ಎ ವರ್ಗದಡಿಯಲ್ಲಿ ಮಾಜಿ ಸೈನಿಕ ಮೀಸಲಾತಿ ಅಡಿಯಲ್ಲಿ ಆಯ್ಕೆ ಆಗಿರುತ್ತಾರೆ. ಈ ಸಂಬಂಧ ನಿಗದಿತ ನಮೂನೆಯಲ್ಲಿ ಸಿಂಧುತ್ವ ಪ್ರಮಾಣ ಪತ್ರ ಸ್ವೀಕೃತವಾಗಿರುವುದಿಲ್ಲ. |

**ಅಧ್ಯಕ್ಷರು,**
ಗ್ರಾಮಲೆಕ್ಕಿಗರ ನೇರನೇಮಕಾತಿ ಆಯ್ಕೆ ಪ್ರಾಧಿಕಾರ
ಮತ್ತು ಜಿಲ್ಲಾಧಿಕಾರಿಗಳು ಹಾಸನ ಜಿಲ್ಲೆ, ಹಾಸನ.

**PR.105**
**SC.10**

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ _ 573 201

**ಸಂಖ್ಯೆ: ಗ್ರಾ.ಲೆ:ಸಿಬ್ಬಂದಿ: 121/2012–13. ದಿನಾಂಕ: 10–10–2013**

### ಅಧಿಸೂಚನೆ

**ವಿಷಯ:–** ಹಾಸನ ಜಿಲ್ಲೆ–ಗ್ರಾಮ ಲೆಕ್ಕಿಗರ ನೇರ ನೇಮಕಾತಿ 2013– ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಿರುವ ಪಟ್ಟಿ ಪ್ರಕಟಣೆ.

**ಉಲ್ಲೇಖ:–** 1. ಸರ್ಕಾರದ ಪತ್ರದ ಸಂಖ್ಯೆ: ಕಂ.ಇ. 33 ಬಿಎಸ್‌ಸಿ 2012, ದಿನಾಂಕ: 21/06/2012.
2. ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 28–1–2013
3. ಈ ಕಛೇರಿಯ ಸಮ ಸಂಖ್ಯೆ ಪ್ರಕಟಣೆ ದಿನಾಂಕ: 20–5–2013
4. ಈ ಕಛೇರಿಯ ತಾತ್ಕಾಲಿಕ ಆಯ್ಕೆ ಪಟ್ಟಿ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 26–9–2013.

ಹಾಸನ ಜಿಲ್ಲೆಯಲ್ಲಿ ಖಾಲಿ ಇರುವ 46 ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬೋರ್ಡಿನೇಟ್ ಬ್ರಾಂಚ್) (ಕೇಡರ್ & ರಿಕ್ರೂಟ್‌ಮೆಂಟ್) ನಿಯಮಗಳು 2008 ಮತ್ತು ತಿದ್ದುಪಡಿ ನಿಯಮಗಳು 2009 ರನ್ವಯ ಹಾಗೂ ಉಲ್ಲೇಖ (1) ರಲ್ಲಿ ನೀಡಿರುವ ಸೂಚನೆಗಳಂತೆ, Online ಮೂಲಕ ಸ್ವೀಕೃತವಾದ ಒಟ್ಟು ಅರ್ಜಿಗಳಲ್ಲಿ 1:10 ಅನುಪಾತದ ಪ್ರಮಾಣದಲ್ಲಿ ಪರಿಶೀಲನಾ ಪಟ್ಟಿಯನ್ನು ತಯಾರಿಸಿ, ಉಲ್ಲೇಖ (3) ರಲ್ಲಿ ಪ್ರಕಟಿಸಲಾಗಿರುತ್ತದೆ.

ಸದರಿ ಪರಿಶೀಲನಾ ಪಟ್ಟಿಯಂತೆ ದಿನಾಂಕ: 05–06–2013 ಕ್ಕೆ ಪರಿಶೀಲನೆಗೆ ಹಾಜರಾದ ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಿದೆ. ದಾಖಲೆಗಳ ಪರಿಶೀಲನೆಯಿಂದ ಅಭ್ಯರ್ಥಿಗಳ ಮೆರಿಟ್ ಮತ್ತು ಮೀಸಲಾತಿ ಆಧಾರದಲ್ಲಿ 46 ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಮತ್ತು ಶೇಕಡಾ 10 ರಷ್ಟು ತಾತ್ಕಾಲಿಕ ಕಾಯ್ದಿರಿಸಿರುವ ಪಟ್ಟಿಯನ್ನು ಉಲ್ಲೇಖ (4) ರ ಪ್ರಕಾರ ಪ್ರಕಟಿಸಲಾಗಿರುತ್ತದೆ. ಮತ್ತು ಈ ಪಟ್ಟಿಯಲ್ಲಿ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ದಿನಾಂಕ 9–10–2013 ರೊಳಗಾಗಿ ಈ ಕಛೇರಿಗೆ ತಲುಪುವಂತೆ ಸಲ್ಲಿಸಲು ತಿಳಿಸಲಾಗಿರುತ್ತದೆ.

ಅದರಂತೆ ಟಿ.ಪಿ.ಸುಬ್ಬಯ್ಯ ರವರು ಮಾಜಿ ಸೈನಿಕರ ಕೋಟಾದಡಿಯಲ್ಲಿ ಆಕ್ಷೇಪಣೆಯೊಂದನ್ನು ಸಲ್ಲಿಸಿದ್ದು, ಈ ಬಗ್ಗೆ ಪರಿಶೀಲಿಸಿ ಸದರಿಯವರ ಆಕ್ಷೇಪಣೆಯು ಸೂಕ್ತವಾದುದಲ್ಲವೆಂದು ನಿಯಮಾನುಸಾರ ವಿಲೇವಾರಿ ಮಾಡಲಾಗಿದೆ.

ಅಭ್ಯರ್ಥಿಗಳ ಮೆರಿಟ್ ಮತ್ತು ಮೀಸಲಾತಿ ಆಧಾರದಲ್ಲಿ 46 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಶೇಕಡಾ 10 ರಷ್ಟು ಅಂತಿಮ ಕಾಯ್ದಿರಿಸಿರುವ ಪಟ್ಟಿಯನ್ನು ಪ್ರಕಟಿಸಲಾಗಿರುತ್ತದೆ.

ಈ ಕೆಳಗಿನ ಷರತ್ತುಗಳಿಗೆ ನೇಮಕಾತಿಯು ಒಳಪಟ್ಟಿರುತ್ತದೆ.

| | |
|---|---|
| 1. | ನೇಮಕಾತಿ ಸಮಯದಲ್ಲಿ ಅಭ್ಯರ್ಥಿಯು ನೇಮಕಾತಿಗೆ ಅನರ್ಹರೆಂದು ಕಂಡು ಬಂದಲ್ಲಿ, ನೇಮಕಾತಿಯನ್ನು ರದ್ದುಪಡಿಸಲಾಗುವುದು. |
| 2. | ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗ್ರಾಮೀಣ, ಯೋಜನಾ ನಿರಾಶ್ರಿತ, ಕನ್ನಡ ಮಾಧ್ಯಮ, ಮಾಜಿ ಸೈನಿಕ ಮತ್ತು ಅಂಗವಿಕಲ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿಯು ಸದರಿ ಪ್ರಮಾಣ ಪತ್ರಗಳ ಬಗ್ಗೆ ಸಕ್ಷಮ ಪ್ರಾಧಿಕಾರಗಳಿಂದ ಸಿಂಧುತ್ವ ಪರಿಶೀಲನೆಗೆ ಒಳಪಟ್ಟಿರುತ್ತದೆ. |
| 3. | ಆಯ್ಕೆಯಾದ ಅಭ್ಯರ್ಥಿಗಳ ದ್ವಿತೀಯ ಪಿ.ಯು.ಸಿ. ಅಂಕ ಪಟ್ಟಿ ಅಥವಾ CBSE ಅಥವಾ ICSE ನಡೆಸುವ 12 ನೇ ತರಗತಿ ಪರೀಕ್ಷೆಯ ಅಂಕ ಪಟ್ಟಿಯ ಬಗ್ಗೆ ಸಕ್ಷಮ ಪ್ರಾಧಿಕಾರಿಗಳ ಪರಿಶೀಲನೆಗೆ ಒಳಪಟ್ಟಿರುತ್ತದೆ. |
| 4. | ಅಭ್ಯರ್ಥಿಗಳ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲವೆಂದು ಹಾಗೂ ಒಳ್ಳೆಯ ನಡತೆ ಮತ್ತು ಪೂರ್ವ ಚರಿತ್ರೆ ಹೊಂದಿರುವ ಬಗ್ಗೆ ಪೋಲೀಸು ಇಲಾಖೆಯಿಂದ ದೃಢೀಕರಣ ಪತ್ರವನ್ನು ಪಡೆಯುವ ಷರತ್ತಿಗೆ ಒಳಪಟ್ಟಿರುತ್ತದೆ. |
| 5. | ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. |
| 6. | ಅಭ್ಯರ್ಥಿಯು ನೇಮಕಾತಿ ಆದೇಶ ತಲುಪಿದ 15 ದಿನಗಳೊಳಗೆ ತಮ್ಮ ಮೂಲ ದಾಖಲಾತಿಗಳೊಂದಿಗೆ ಖುದ್ದಾಗಿ ಸಂಬಂಧಿಸಿದ ತಹಸೀಲ್ದಾರರ ಸಮಕ್ಷಮದಲ್ಲಿ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18 ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುವುದು. |
| 7. | ಶೇಕಡವಾರು ಅಂಕಗಳು ಒಂದೇ ಇದ್ದಂತಹ ಅಭ್ಯರ್ಥಿಗಳ ಪೈಕಿ ನಿಯಮಾನುಸಾರ ವಯಸ್ಸಿನಲ್ಲಿ ಹಿರಿಯರಾದ ಅಭ್ಯರ್ಥಿಯನ್ನು ಆಯ್ಕೆ ಮಾಡಿದೆ. |

ಅಂತಿಮ ಆಯ್ಕೆ ಪಟ್ಟಿ ಮತ್ತು ಅಂತಿಮ ಕಾಯ್ದಿರಿಸಿರುವ ಪಟ್ಟಿಗಳನ್ನು ಈ ಕಚೇರಿಯ ವೆಬ್‌ಸೈಟ್ http://hassan.nic.in ರಲ್ಲಿ ನೋಡಬಹುದು.

**ಅಧ್ಯಕ್ಷರು,**
ಗ್ರಾಮಲೆಕ್ಕಿಗರ ನೇಮಕಾತಿ ಸಮಿತಿ
ಮತ್ತು ಜಿಲ್ಲಾಧಿಕಾರಿಗಳು ಹಾಸನ ಜಿಲ್ಲೆ, ಹಾಸನ.

**PR.106**
**SC.10**

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಹಾಸನ ಜಿಲ್ಲೆ, ಹಾಸನ – 573 201**

**ಸಂಖ್ಯೆ: ಗ್ರಾ.ಲೆ:ಸಿಬ್ಬಂದಿ: 121/2012–13, ದಿನಾಂಕ: 26–09–2013**

**ಅಧಿಸೂಚನೆ**

**ವಿಷಯ:–** ಹಾಸನ ಜಿಲ್ಲೆ–ಗ್ರಾಮ ಲೆಕ್ಕಿಗರ ನೇರ ನೇಮಕಾತಿ 2013– ತಾತ್ಕಾಲಿಕ ಆಯ್ಕೆ ಪಟ್ಟಿ ಮತ್ತು ತಾತ್ಕಾಲಿಕ ಕಾಯ್ದಿರಿಸಿರುವ ಪಟ್ಟಿ ಪ್ರಕಟಣೆ.

**ಉಲ್ಲೇಖ:–** 1. ಸರ್ಕಾರದ ಪತ್ರದ ಸಂಖ್ಯೆ: ಕಂ.ಇ. 33 ಬಿಎಸ್‌ಸಿ 2012, ದಿನಾಂಕ: 21/06/2012.

2. ಈ ಕಛೇರಿಯ ಸಮ ಸಂಖ್ಯೆ ಅಧಿಸೂಚನೆ ದಿನಾಂಕ: 28.01.2013.

ಈ ಕಛೇರಿಯ ಸಮ ಸಂಖ್ಯೆ ಪ್ರಕಟಣೆ ದಿನಾಂಕ: 20.05.2013.

ಹಾಸನ ಜಿಲ್ಲೆಯಲ್ಲಿ ಖಾಲಿ ಇರುವ 46 ಗ್ರಾಮ ಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸಬೋರ್ಡಿನೇಟ್ ಬ್ರಾಂಚ್) (ಕೇಡರ್ & ರಿಕ್ರೂಟ್‌ಮೆಂಟ್) ನಿಯಮಗಳು 2008 ಮತ್ತು ತಿದ್ದುಪಡಿ ನಿಯಮಗಳು 2009 ರನ್ವಯ ಹಾಗೂ ಉಲ್ಲೇಖ (1) ರಲ್ಲಿ ನೀಡಿರುವ ಸೂಚನೆಗಳಂತೆ, Online ಮೂಲಕ ಸ್ವೀಕೃತವಾದ ಒಟ್ಟು ಅರ್ಜಿಗಳಲ್ಲಿ 1:10 ಅನುಪಾತದ ಪ್ರಮಾಣದಲ್ಲಿ ಪರಿಶೀಲನಾ ಪಟ್ಟಿಯನ್ನು ತಯಾರಿಸಿ, ಉಲ್ಲೇಖ (3) ರಲ್ಲಿ ಪ್ರಕಟಿಸಲಾಗಿರುತ್ತದೆ.

ಸದರಿ ಪರಿಶೀಲನಾ ಪಟ್ಟಿಯಂತೆ ದಿನಾಂಕ: 05/06/2013 ಕ್ಕೆ ಪರಿಶೀಲನೆಗೆ ಹಾಜರಾದ ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಿದೆ. ದಾಖಲೆಗಳ ಪರಿಶೀಲನೆಯಿಂದ ಅಭ್ಯರ್ಥಿಗಳ ಮೆರಿಟ್ ಮತ್ತು ಮೀಸಲಾತಿ ಆಧಾರದಲ್ಲಿ 46 ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲಾಗಿದೆ. ಇದಕ್ಕೆ ಪೂರಕವಾಗಿ ಶೇಕಡಾ 10 ರಷ್ಟು ತಾತ್ಕಾಲಿಕ ಕಾಯ್ದಿರಿಸಿರುವ ಪಟ್ಟಿಯನ್ನು (Provisional Waiting list) ಸಹ ಪ್ರಕಟಿಸಲಾಗಿದೆ.

ದಾಖಲಾತಿಗಳ ಪರಿಶೀಲನೆಗೆ ದಿನಾಂಕ 05.06.2013 ರಲ್ಲಿ ಹಾಜರಾಗಿದ್ದ ಈ ಕೆಳಕಂಡ ಮಾನ್ಯತೆ ಪಡೆಯದ ಕಾಲೇಜುಗಳ ಅಭ್ಯರ್ಥಿಗಳನ್ನು ಪದವಿ ಪೂರ್ವ ಶಿಕ್ಷಣ ಮಂಡಳಿ, ಬೆಂಗಳೂರು ರವರ ಪತ್ರ ಪಿಯೂಇ/ಶೈಶಾ–03/ಸ್ಪಷ್ಟೀಕರಣ–01/ಎಲ್‌ಎಲ್/2013–14 ದಿನಾಂಕ: 08.07.2013 ಹಾಗೂ **COBSE, New Delhi** ರವರ ಪತ್ರ COBSE/C.99/2013 ದಿನಾಂಕ 23.07.2013 ರಂತೆ ಆಯ್ಕೆ ಪಟ್ಟಿಯಿಂದ ಕೈಬಿಡಲಾಗಿದೆ.

**Board of Higher Secondary Education, Delhi**

- Goutham Higher Sec. Sechool, Bangalore (105F)
- Venkateshwara Higher SR. Secondary School, Bangalore (1883)
- Royal International Acadamy, Bangalore.(108)
- Sri Guru Basava Education Trust, Gulbarga.
- Gurukul Vidya Mandir Sr.School, Ranchi Bangar, Mathura.
- Sri Basaveshwar Vidyapeeth, Karatagi (KTK)

- Good Shepherd School, Bellary, Karnataka
- Shri Vinayaka Sr. Sec.School, Kembavi, yadagiri Dist.
- Srujanasheel Dnyana Prasarak Samsthe, Devarhipparagi (KTK)

**National Institute Research and Development Council. New Delhi.**

- Shree Sharada Shikshan Samsthe(R) Laxmi Nagar, Banhatti-587311. Jamakandi Taluk, Bagalkot Dist.

**Higher Secondary Course Certificate**

- Arulmalar MHSS, Madhuri (Tamil Nadu State)
- Hindi Sahithya Sammelan, Prayag, Bahadurganj, Alahabad.

**Maharashtra State Board of Secodary and Higher Secondary Education**

- Sri Gurubasava Secondary & Junior College, Sankh, Jath Taluk. Sangli District.

ಈ ಕೆಳಗಿನ ಷರತ್ತುಗಳಿಗೆ ನೇಮಕಾತಿಯು ಒಳಪಟ್ಟಿರುತ್ತದೆ.

**ಷರತ್ತುಗಳು:–**

| | |
|---|---|
| 1. | ನೇಮಕಾತಿ ಸಮಯದಲ್ಲಿ ಅಭ್ಯರ್ಥಿಯು ನೇಮಕಾತಿಗೆ ಅನರ್ಹರೆಂದು ಕಂಡು ಬಂದಲ್ಲಿ, ನೇಮಕಾತಿಯನ್ನು ರದ್ದುಪಡಿಸಲಾಗುವುದು. |
| 2. | ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ, 3ಬಿ, ಗ್ರಾಮೀಣ, ಯೋಜನಾ ನಿರಾಶ್ರಿತ, ಕನ್ನಡ ಮಾಧ್ಯಮ, ಮಾಜಿ ಸೈನಿಕ ಮತ್ತು ಅಂಗವಿಕಲ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳ ನೇಮಕಾತಿಯು ಸದರಿ ಪ್ರಮಾಣ ಪತ್ರಗಳ ಬಗ್ಗೆ ಸಕ್ಷಮ ಪ್ರಾಧಿಕಾರಗಳಿಂದ ಸಿಂಧುತ್ವ ಪರಿಶೀಲನೆಗೆ ಒಳಪಟ್ಟಿರುತ್ತದೆ. |
| 3. | ಆಯ್ಕೆಯಾದ ಅಭ್ಯರ್ಥಿಗಳ ದ್ವಿತೀಯ ಪಿ.ಯು.ಸಿ. ಅಂಕ ಪಟ್ಟಿ ಅಥವಾ CBSE ಅಥವಾ ICSE ನಡೆಸುವ 12 ನೇ ತರಗತಿ ಪರೀಕ್ಷೆಯ ಅಂಕ ಪಟ್ಟಿಯ ಬಗ್ಗೆ ಸಕ್ಷಮ ಪ್ರಾಧಿಕಾರಿಗಳ ಪರಿಶೀಲನೆಗೆ ಒಳಪಟ್ಟಿರುತ್ತದೆ. |
| 4. | ಅಭ್ಯರ್ಥಿಗಳ ವಿರುದ್ಧ ಯಾವುದೇ ಕ್ರಿಮಿನಲ್ ಮೊಕದ್ದಮೆ ಇರುವುದಿಲ್ಲವೆಂದು ಹಾಗೂ ಒಳ್ಳೆಯ ನಡತೆ ಮತ್ತು ಪೂರ್ವ ಚರಿತ್ರೆ ಹೊಂದಿರುವ ಬಗ್ಗೆ ಪೋಲೀಸು ಇಲಾಖೆಯಿಂದ ದೃಢೀಕರಣ ಪತ್ರವನ್ನು ಪಡೆಯುವ ಷರತ್ತಿಗೆ ಒಳಪಟ್ಟಿರುತ್ತದೆ. |
| 5. | ಅಭ್ಯರ್ಥಿಯು ಸಲ್ಲಿಸುವ ಮೂಲ ದಾಖಲಾತಿಗಳಲ್ಲಿ ತಪ್ಪು ಮಾಹಿತಿ ಅಥವಾ ಸುಳ್ಳು ಎಂದು ಕಂಡು ಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. |
| 6. | ಅಭ್ಯರ್ಥಿಯು ನೇಮಕಾತಿ ಆದೇಶ ತಲುಪಿದ 15 ದಿನಗಳೊಳಗೆ ತಮ್ಮ ಮೂಲ ದಾಖಲಾತಿಗಳೊಂದಿಗೆ ಖುದ್ದಾಗಿ ಸಂಬಂಧಿಸಿದ ತಹಸೀಲ್ದಾರರ ಸಮಕ್ಷಮದಲ್ಲಿ ವರದಿ ಮಾಡಿಕೊಳ್ಳುವುದು. ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 18 ರನ್ವಯ ನೇಮಕಾತಿಯನ್ನು ರದ್ದುಪಡಿಸಲಾಗುವುದು. |
| 7. | ಶೇಕಡವಾರು ಅಂಕಗಳು ಒಂದೇ ಇದ್ದಂತಹ ಅಭ್ಯರ್ಥಿಗಳ ಪೈಕಿ ನಿಯಮಾನುಸಾರ ವಯಸ್ಸಿನಲ್ಲಿ ಹಿರಿಯರಾದ ಅಭ್ಯರ್ಥಿಯನ್ನು ಆಯ್ಕೆ ಮಾಡಿದೆ. |
| 8. | ಈ ಆಯ್ಕೆ ಪಟ್ಟಿಯಲ್ಲಿರವ ಅಭ್ಯರ್ಥಿಗಳ ಆಯ್ಕೆ ಬಗ್ಗೆ ನಿರ್ದಿಷ್ಟ ಆಕ್ಷೇಪಣೆಗಳು ಬಂದು ವಿಚಾರಣೆಯಿಂದ ಆಕ್ಷೇಪಣೆ ಖಚಿತಗೊಂಡಲ್ಲಿ ಅಂತಹಾ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಪಡಿಸಲಾಗುವುದು. |

ತಾತ್ಕಾಲಿಕ ಆಯ್ಕೆ ಪಟ್ಟಿ ಮತ್ತು ತಾತ್ಕಾಲಿಕ ಕಾಯ್ದಿರಿಸಿರುವ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಸದರಿ ಪಟ್ಟಿಗಳು ಪ್ರಕಟವಾದ ದಿನಾಂಕದಿಂದ **ಹತ್ತು** ದಿನಗಳೊಳಗಾಗಿ ಅಂದರೆ ದಿನಾಂಕ: 09–10–2013 ರ ಸಂಜೆ 5.30 ಗಂಟೆಯೊಳಗೆ ಈ ಕಛೇರಿಗೆ ತಲುಪುವಂತೆ, ಸೂಕ್ತ ದಾಖಲಾತಿಗಳೊಂದಿಗೆ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿನ ಅಪರ ಜಿಲ್ಲಾಧಿಕಾರಿಯವರ ಎದುರು ಖುದ್ದಾಗಿ/ಲಕೋಟೆಯಲ್ಲಿ ಆಕ್ಷೇಪಣೆಯನ್ನು ಸಲ್ಲಿಸುವುದು. ನಂತರ ಬಂದ ಅಂದರೆ ಲಕೋಟೆ/ಮುದ್ದಾಂ/ಪೋಸ್ಟ್ ಮೂಲಕ ದಿನಾಂಕ 10–10–2013 ರಂದು ಸ್ವೀಕೃತವಾಗುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

ತಾತ್ಕಾಲಿಕ ಆಯ್ಕೆ ಪಟ್ಟಿ ಮತ್ತು ತಾತ್ಕಾಲಿಕ ಕಾಯ್ದಿರಿಸಿರುವ ಪಟ್ಟಿಗಳನ್ನು ಈ ಕಚೇರಿಯ ವೆಬ್‌ಸೈಟ್ http://hassan.nic.in ರಲ್ಲಿ ನೋಡಬಹುದು.

**ಅಧ್ಯಕ್ಷರು,**
ಗ್ರಾಮಲೆಕ್ಕಿಗರ ನೇಮಕಾತಿ ಸಮಿತಿ
ಮತ್ತು ಜಿಲ್ಲಾಧಿಕಾರಿಗಳು ಹಾಸನ ಜಿಲ್ಲೆ, ಹಾಸನ.

**PR.104**
**SC.10**

**FORM-IV**

**(SEE RULE 12)**

**NOTICE**

IT IS HEREBY NOTIFIED THAT THE UNDERSIGNED HAS CHANGED HIS NAME FROM: **HUCHCHAPPA ADIVEPPA TALAKERI** (ORIGINAL NAME) TO **SHIVAKUMAR ADIVEPPA RATNAGIRI** (ASSUMED NAME)

**PD.C/N.132**
**SC.10**

**HUCHCHAPPA ADIVEPPA TALAKERI**